# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಹದಿನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಮಂಗಳವಾರ, ದಿನಾಂಕ 06ನೇ ಜೂನ್, 2017
(ಸಮಯ: ಬೆಳಿಗ್ಗೆ 10.30 ಗಂಟೆಗೆ)

----

### 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಎರಡನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಎರಡನೇ ಪಟ್ಟಿ

### 2. ವಿತ್ತೀಯ ಕಾರ್ಯಕಲಾಪಗಳು

2017–18ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಗಳ ಮಂಡನೆ ಹಾಗೂ ಚರ್ಚೆ.

| ಬೇಡಿಕೆ ಸಂಖ್ಯೆ | ಬೇಡಿಕೆಯ ಹೆಸರು |
|---|---|
| 01 | ಕೃಷಿ ಮತ್ತು ತೋಟಗಾರಿಕೆ |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ |
| 05 | ಒಳಾಡಳಿತ ಮತ್ತು ಸಾರಿಗೆ |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ |
| 08 | ಅರಣ್ಯ, ಜೀವಿ ಶಾಸ್ತ್ರ ಮತ್ತು ಪರಿಸರ |
| 09 | ಸಹಕಾರ |
| 10 | ಸಮಾಜ ಕಲ್ಯಾಣ |

. . . 2/..

| | |
|---|---|
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು |
| 13 | ಆಹಾರ ಮತ್ತು ನಾಗರೀಕ ಸರಬರಾಜು |
| 14 | ಕಂದಾಯ |
| 15 | ಮಾಹಿತಿ ತಂತ್ರಜ್ಞಾನ |
| 16 | ವಸತಿ |
| 17 | ಶಿಕ್ಷಣ |
| 18 | ವಾಣಿಜ್ಯ ಮತ್ತು ಕೈಗಾರಿಕೆ |
| 19 | ನಗರಾಭಿವೃದ್ಧಿ |
| 20 | ಲೋಕೋಪಯೋಗಿ |
| 21 | ಜಲ ಸಂಪನ್ಮೂಲ |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |
| 23 | ಕಾರ್ಮಿಕ ಮತ್ತು ಕೌಶಲ್ಯ ಅಭಿವೃದ್ಧಿ |
| 24 | ಇಂಧನ |
| 25 | ಕನ್ನಡ ಮತ್ತು ಸಂಸ್ಕೃತಿ |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |

## 3. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. **ಶ್ರೀಯುತರುಗಳಾದ ಜಗದೀಶ್ ಶೆಟ್ಟರ್, ಬಸವರಾಜ ಬೊಮ್ಮಾಯಿ, ವಿ. ಸುನೀಲ್ ಕುಮಾರ್, ವಿಶ್ವೇಶ್ವರ ಹೆಗಡೆ ಕಾಗೇರಿ, ಗೋವಿಂದ ಎಂ. ಕಾರಜೋಳ ಹಾಗೂ ಇತರರು** –ತೀವ್ರ ಬರಗಾಲದಿಂದ ರಾಜ್ಯದಲ್ಲಿ ಉಂಟಾಗಿರುವ ತೊಂದರೆಯ ಬಗ್ಗೆ ನೀಡಿರುವ ಸೂಚನೆಯ ಮೇಲೆ ಮುಂದುವರೆದ ಚರ್ಚೆ.

2. **ಶ್ರೀಯುತರುಗಳಾದ ವಿ. ಸುನೀಲ್ ಕುಮಾರ್, ಕೆ.ಜಿ. ಬೋಪಯ್ಯ ಮತ್ತು ವಿಶ್ವೇಶ್ವರ ಹೆಗಡೆ ಕಾಗೇರಿ** ಇವರುಗಳು – ರಾಜ್ಯದಲ್ಲಿ ಎಂಡೋಸಲ್ಫಾನ್ ಪೀಡಿತರಿಗೆ ಪುನರ್ವಸತಿ ಹಾಗೂ ಇತರೆ ಸೌಲಭ್ಯಗಳನ್ನು ಒದಗಿಸುವ ವಿಷಯದ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

3. **ಶ್ರೀಯುತರುಗಳಾದ ಎನ್.ಹೆಚ್. ಕೋನರಡ್ಡಿ ಮತ್ತು ಬಿ.ಆರ್. ಯಾವಗಲ್** ಇವರುಗಳು – 2016–17ನೇ ಸಾಲಿನ ಆಯವ್ಯಯದಲ್ಲಿ ಮಲಪ್ರಭಾ ಎಡದಂಡೆ ಮತ್ತು ಬಲದಂಡೆ ಕಾಲುವೆಗಳನ್ನು ಆಧುನಿಕ ಪದ್ಧತಿಯಂತೆ ದುರಸ್ಥಿ ಮಾಡಲು ಕಾಯ್ದಿರಿಸಲಾಗಿರುವ ರೂ. 962.00 ಕೋಟಿ ಮೊತ್ತದ ಯೋಜನೆಯನ್ನು ತ್ವರಿತವಾಗಿ ಜಾರಿಗೊಳಿಸುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

## 4. ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಜೆ.ಆರ್. ಲೋಬೋ** ಇವರು – ರಾಜ್ಯದ ಕರಾವಳಿ ಮತ್ತು ಮಲೆನಾಡು ಜಿಲ್ಲೆಗಳಲ್ಲಿ ಗ್ರಾಮೀಣಾಭಿವೃದ್ಧಿ ಇಲಾಖೆಯು ತಂದಿರುವ ನಮೂನೆ–9 ಮತ್ತು 11 ರಿಂದ ಆಗುತ್ತಿರುವ ತೊಂದರೆಯನ್ನು ನೀಗಿಸುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

2. **ಶ್ರೀ ಕೆ.ಜಿ. ಬೋಪಯ್ಯ** ಇವರು – ಭೂ ಕಂದಾಯ ಕಾಯಿದೆ ಕಲಂ 20 ಮತ್ತು 80ಕ್ಕೆ ತಂದಿರುವ ತಿದ್ದುಪಡಿಯಂತೆ ಕೊಡಗಿನ ಎಲ್ಲಾ ಜಮ್ಮಾ ಬಾಣೆಗಳಿಗೆ ಕಂದಾಯ ವಿಧಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

3. **ಶ್ರೀ ಪಿ.ಟಿ. ಪರಮೇಶ್ವರ ನಾಯ್ಕ** ಇವರು – ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ತಾಂತ್ರಿಕ ಪದವಿ ಮತ್ತು ವಿಶ್ವವಿದ್ಯಾನಿಲಯ (ಯುನಿರ್ವಸಿಟಿ) ಗಳಲ್ಲಿ ಹೆಚ್ಚಿನ ಅಂಕ ಪಡೆದವರಿಗೆ ವಿಶೇಷ ನೇರ ನೇಮಕಾತಿ ವೃಂದ ಎ ಮತ್ತು ಬಿ ಗೆ ನೇಮಕ ಮಾಡಲು 1985ರಲ್ಲಿ ಇದ್ದ ನಿಯಮಗಳನ್ನು ಸ್ಥಗಿತಗೊಳಿಸಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

4. **ಶ್ರೀ ಬಿ. ವೈ. ರಾಘವೇಂದ್ರ** ಇವರು – ಶಿಕಾರಿಪುರ ತಾಲ್ಲೂಕಿನ ಹರಗುವಳ್ಳಿ ಕಾಲೇಜನ್ನು ಬೇರೆಡೆ ಸ್ಥಳಾಂತರಿಸಿರುವ ಪ್ರಕ್ರಿಯೆಯನ್ನು ತಡೆದು ಪ್ರಸ್ತುತ ಸ್ಥಳದಲ್ಲಿಯೇ ಮುಂದುವರೆಸುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

. . . 4/..

5. **ಶ್ರೀ ಆರ್. ನರೇಂದ್ರ** ಇವರು – ಚಾಮರಾಜನಗರ ಜಿಲ್ಲೆಯಲ್ಲಿ ವಾಸವಾಗಿರುವ ವೆಲ್ಲಾಳ ಜಾತಿಯವರಿಗೆ ಸಿಂಧುತ್ವ ಪ್ರಮಾಣ ಪತ್ರ ನೀಡದಿರುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

6. **ಶ್ರೀ ಎಂ. ಕೃಷ್ಣಾರೆಡ್ಡಿ** ಇವರು – ಚಿಂತಾಮಣಿಯ ಸರ್ಕಾರಿ ಬಾಲಕರ ಹಿರಿಯ ಪ್ರಾಥಮಿಕ ಶಾಲೆಗೆ ಸೇರಿದ 3 ಎಕರೆ 10 ಗುಂಟೆ ಜಾಗದಲ್ಲಿ ಅಕ್ರಮವಾಗಿ ಶ್ರೀ ವಿದ್ಯಾಗಣಪತಿ ಟ್ರಸ್ಟ್‌ನ್ನು ಸ್ಥಾಪಿಸಿ ವಾಣಿಜ್ಯ ಮಳಿಗೆಗಳನ್ನು ನಿರ್ಮಾಣ ಮಾಡಿರುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

7. **ಶ್ರೀ ಎಸ್.ಟಿ. ಸೋಮಶೇಖರ್** ಇವರು – ಬೆಂಗಳೂರು ದಕ್ಷಿಣ ತಾಲ್ಲೂಕು ಸುಂಕದ ಕಟ್ಟೆ ಸರ್ವೆ ನಂ. 37 ಹಾಗೂ ನೆಟ್ಟಿಗೆರೆ ಸರ್ವೆ ನಂ. 45 ರಲ್ಲಿ ಹಲವಾರು ವರ್ಷಗಳಿಂದ ಸಾಗುವಳಿ ಮಾಡುತ್ತಿರುವ ರೈತರಿಗೆ ಅರಣ್ಯ ಇಲಾಖೆಯವರಿಂದ ಉಂಟಾಗಿರುವ ತೊಂದರೆಯ ಬಗ್ಗೆ ಮಾನ್ಯ ಅರಣ್ಯ ಸಚಿವರ ಗಮನ ಸೆಳೆಯುವುದು.

8. **ಶ್ರೀ ಹೆಚ್. ಎಸ್. ಪ್ರಕಾಶ್ ಮತ್ತು ಶ್ರೀ ಹೆಚ್.ಡಿ. ರೇವಣ್ಣ** ಇವರುಗಳು – ಕೆ.ಐ.ಎ.ಡಿ.ಬಿ. ವತಿಯಿಂದ ಹಾಸನ ಜಿಲ್ಲೆಯಲ್ಲಿ ಎಸ್.ಇ. ಝುಡ್ ಯೋಜನೆಯಡಿ ವಿವಿಧ ಕೈಗಾರಿಕಾ ಉದ್ಯಮಗಳನ್ನು ಸ್ಥಾಪಿಸಲು ಮಂಜೂರಾದ ಭೂಮಿಯಲ್ಲಿ ನಿಯಮಾವಳಿಗಳ ರೀತ್ಯ ಉದ್ಯಮಗಳನ್ನು ಸ್ಥಾಪಿಸದೆ ಇರುವವರ ವಿರುದ್ಧ ಕ್ರಮ ಕೈಗೊಳ್ಳುವುದರ ಬಗ್ಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಮೂಲಭೂತ ಸೌಲಭ್ಯ ಅಭಿವೃದ್ಧಿ ಸಚಿವರ ಗಮನ ಸೆಳೆಯುವುದು.

9. **ಶ್ರೀಯುತರುಗಳಾದ ಹೆಚ್.ಡಿ. ರೇವಣ್ಣ, ಕೆ. ಗೋಪಾಲಯ್ಯ ಮತ್ತು ಡಾ॥ ಕೆ. ಶ್ರೀನಿವಾಸಮೂರ್ತಿ** ಇವರುಗಳು – ಹಾಸನ ಜಿಲ್ಲೆಯ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಉಪನ್ಯಾಸಕರುಗಳ ಹುದ್ದೆಗಳನ್ನು ನೇಮಕ ಮಾಡದೆ ಹಾಗೂ ಅವಶ್ಯಕ ಮೂಲಭೂತ ಸೌಕರ್ಯಗಳನ್ನು ಒದಗಿಸದೇ ವಿದ್ಯಾರ್ಥಿಗಳಿಗೆ ತೊಂದರೆಯಾಗಿರುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

**ಎಸ್. ಮೂರ್ತಿ**
ಕಾರ್ಯದರ್ಶಿ(I/c)

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
http://kla.kar.nic.in/assembly/lob/lob.htm